

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1784 (2020)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ವಿಷಯ : ಕೋವಿಡ್-19 ಬಳಲುತ್ತಿರುವವರಿಗೆ ಖರ್ಚು ಮಾಡಿದ ವಿವರ

(ಅ) ಕಾರವಾರ ಜಿಲ್ಲೆಯ ವಿವಿಧ ತಾಲ್ಲೂಕಿನಲ್ಲಿ ಬರುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ನಡೆಸಲ್ಪಡುವ ವಸತಿ ಗೃಹದಲ್ಲಿ ಕೋವಿಡ್-19 ಮಹಾಮಾರಿ ಖಾಯಿಲೆಗೆ ನೀಡಿರುವ ವಸತಿ ಗೃಹಗಳ ಸಂಖ್ಯೆಗಳೆಷ್ಟು; ಸದರಿ ವಸತಿ ಗೃಹದಲ್ಲಿ ಇಲ್ಲಿಯವರೆಗೆ ಎಷ್ಟು ಜನ ಕೋವಿಡ್‌ನಿಂದ ಬಳಲುತ್ತಿರುವವರನ್ನು ದಾಖಲೆ ಮಾಡಿಸಿಕೊಂಡಿರುತ್ತಾರೆ ; ಇವರಿಗೆ ಪ್ರತಿ ಹಂತದಲ್ಲೂ ಆಗಿರುವ ಖರ್ಚು ಎಷ್ಟು ; (ಸವಿಸ್ತಾರವಾಗಿ ತಾಲ್ಲೂಕುವಾರು/ಜಿಲ್ಲಾವಾರು ವಿವರ ನೀಡುವುದು)

(ಆ) ಈಗಾಗಲೇ ಕೋವಿಡ್-19 ಮಹಾಮಾರಿ ಖಾಯಿಲೆ ಸಲುವಾಗಿ ಮಾರ್ಚ್-2020 ರಿಂದ ಜನವರಿ 2021ನೇ ವರೆಗೆ ಬಂದಿರುವ ರೋಗಿಗಳಿಗೆ ವಿಶ್ರಾಂತಿ ಮಾಡಲು ಖರೀದಿಸಿರುವ ಬೆಡ್‌ಗಳ ಸಂಖ್ಯೆ ಎಷ್ಟು; ಸದರಿ ಬೆಡ್‌ಗಳನ್ನು ಮುಂದೆ ವಸತಿ ಗೃಹಗಳಿಗೆ ಬರುವ ವಿದ್ಯಾರ್ಥಿಗಳಿಗೆ ನೀಡುತ್ತೀರೋ ಹೇಗೆ ; (ವಿವರ ನೀಡುವುದು)

(ಇ) ಹಾಗಾದರೆ, ಈಗ ಶಾಲಾ ಕಾಲೇಜುಗಳು ಆರಂಭವಾಗಿದ್ದು, ವಿದ್ಯಾರ್ಥಿಗಳು ವಸತಿ ಗೃಹದಲ್ಲಿ ವಾಸ್ತವ್ಯ ಮಾಡಲು ಮುನ್ನೆಚ್ಚರಿಕೆಯಾಗಿ ಕೈಗೊಂಡಿರುವ ಕ್ರಮಗಳೇನು ? (ಸವಿಸ್ತಾರ ವರದಿ ನೀಡುವುದು)